# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2429
ಸದಸ್ಯರ ಹೆಸರು : ಡಾ. ಕೆ.ಗೋವಿಂದರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು
ಉತ್ತರಿಸಬೇಕಾದ ದಿನಾಂಕ : 22-03-2022

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 3 ವರ್ಷಗಳಲ್ಲಿ, ರಾಜ್ಯದಲ್ಲಿ ನಡೆದಿರುವ ಬಾಲ್ಯ ವಿವಾಹಗಳು ಎಷ್ಟು; (ವರ್ಷವಾರು, ಜಿಲ್ಲಾವಾರು ಮಾಹಿತಿ ಒದಗಿಸುವುದು) | ಕಳೆದ ಮೂರು ವರ್ಷಗಳಲ್ಲಿ, ರಾಜ್ಯದಲ್ಲಿ ನಡೆದಿರುವ ಬಾಲ್ಯ ವಿವಾಹಗಳ ವರ್ಷವಾರು, ಜಿಲ್ಲಾವಾರು ಮಾಹಿತಿಯನ್ನು **ಅನುಬಂಧ-1ರಲ್ಲಿ** ಒದಗಿಸಿದೆ. |
| ಆ | ಬಾಲ್ಯ ವಿವಾಹಗಳಲ್ಲಿ ಕರ್ನಾಟಕ ದೇಶದಲ್ಲೇ ಮೊದಲ ಸ್ಥಾನದಲ್ಲಿದ್ದು ಕುಖ್ಯಾತಿಗಳಿಸಿದೆ ಎಂದು ವರದಿಯಾಗಿರುವುದು ನಿಜವೇ; | National Crime Records Bureau Ministry of Home Affairs ರವರ Crime In India 2020 ವರದಿ ಅನುಸಾರ ಬಾಲ್ಯ ವಿವಾಹ ವರದಿಯಾದ ಪ್ರಕರಣಗಳು 184 ಇರುತ್ತದೆ. ಉಳಿದ ರಾಜ್ಯಗಳಿಗೆ ಹೋಲಿಸಿದಾಗ ಕರ್ನಾಟಕ ರಾಜ್ಯದಲ್ಲಿ ಪ್ರಕರಣಗಳು ಹೆಚ್ಚು ವರದಿಯಾಗಿರುತ್ತದೆ. |
| ಇ | ಹಾಗಿದ್ದಲ್ಲಿ, ಈ ಸಾಮಾಜಿಕ ಪಿಡುಗಿಗೆ ಕಾರಣಗಳೇನು; | ಬಾಲ್ಯ ವಿವಾಹಕ್ಕೆ ಪ್ರಮುಖ ಕಾರಣಗಳು ಬಡತನ, ಅಜ್ಞಾನ, ಮೂಢನಂಬಿಕೆ, ಅರಿವಿನ ಕೊರತೆ, ಅನಕ್ಷರತೆ, ಕಾನೂನು ತಿಳುವಳಿಕೆ ಇಲ್ಲದಿರುವುದು, ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ನಿರ್ಲಕ್ಷ್ಯ; ಹೆಣ್ಣು ಮಕ್ಕಳು ಜವಾಬ್ದಾರಿ ಎನ್ನುವ ಮನೋಭಾವ, ವೃದ್ಧರ ಹಾಗೂ ಅನಾರೋಗ್ಯದ ಹಿರಿಯರ ಆಸೆ. |
| ಈ | ಈ ಪಿಡುಗಿನ ನಿವಾರಣೆಗೆ ಸರ್ಕಾರ ತೆಗೆದುಕೊಂಡಿರುವ ಪರಿಹಾರೋಪಾಯಗಳೇನು? (ವಿವರಗಳನ್ನು ಒದಗಿಸುವುದು) | ಈ ಪಿಡುಗಿನ ನಿವಾರಣೆಗೆ ಸರ್ಕಾರವು ತೆಗೆದುಕೊಂಡಿರುವ ಪರಿಹಾರ ಕ್ರಮಗಳು ಕೆಳಕಂಡಂತೆ ಇರುತ್ತದೆ.<br><br>**ಅರಿವು ಮೂಡಿಸುವ ಕಾರ್ಯಕ್ರಮಗಳು:**<br>➢ NFHS ಸರ್ವೆ ಪ್ರಕಾರ ಬಾಲ್ಯವಿವಾಹ ಹೆಚ್ಚಾಗಿರುವ 9 ಜಿಲ್ಲೆಗಳಲ್ಲಿ ಹಾಗೂ ಉಳಿದ 17 ಜಿಲ್ಲೆಗಳಲ್ಲಿಯೂ ಸಹ ಒಂದು ತಿಂಗಳವರೆಗೆ ಬಾಲ್ಯವಿವಾಹ ನಿಷೇಧ ಕಾಯ್ದೆಯ ಕುರಿತು **911 ಬಸ್ ಬ್ರ್ಯಾಂಡಿಂಗ್ ಮಾಡುವ ಮೂಲಕ** ಅರಿವು ಮೂಡಿಸಲಾಗಿದೆ.<br><br>➢ ಬಾಲ್ಯವಿವಾಹ ನಿಷೇಧದ ಬಗ್ಗೆ ರಾಜ್ಯಾದ್ಯಂತ ಆಂದೋಲನದ ರೂಪದಲ್ಲಿ **"ಬಾಲ್ಯವಿವಾಹ ನಿಷೇಧ ಅಭಿಯಾನ"** ಎಂಬ ವಿಶೇಷ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ವಾರ್ತಾ ಮತ್ತು ಸಂಪರ್ಕ ಇಲಾಖೆಯ ಸಹಯೋಗದೊಂದಿಗೆ **"ವಿಡಿಯೋ ಆನ್ ವೀಲ್ಸ್"** ವಾಹನಗಳ ಮೂಲಕ 788 ಹೋಬಳಿಗಳಲ್ಲಿ 3000 ಪ್ರದರ್ಶನಗಳನ್ನು ಮತ್ತು 7 ಬಿಬಿಎಂಪಿ ವಲಯಗಳಲ್ಲಿ 350 ಪ್ರದರ್ಶನಗಳನ್ನು ಏರ್ಪಡಿಸುವ ಮೂಲಕ ವ್ಯಾಪಕ ಪ್ರಚಾರ ನೀಡಿ ಅರಿವು ಮೂಡಿಸಲು ಕ್ರಮವಹಿಸಲಾಗಿದೆ. |

| | | |
|---|---|---|
| | | ಇದಲ್ಲದೆ ಮಾನವ ಸರಪಳಿ ನಿರ್ಮಾಣ, ಸಹಿ ಕ್ಯಾಂಪೇನ್, ಪ್ರತಿಜ್ಞಾ ಸ್ವೀಕಾರದ ಮೂಲಕ ಸಾರ್ವಜನಿಕರ ಜವಾಬ್ದಾರಿಗಳ ಬಗ್ಗೆ ಜಾಗೃತಿ ಮೂಡಿಸಲು ಕ್ರಮವಹಿಸಲಾಗಿದೆ.<br>➢ ದಿನಾಂಕ:07-03-2022 ರಿಂದ **ಶೋಷಣೆ ಮುಕ್ತ ಸಮಾಜ ನಮ್ಮ ಕರ್ತವ್ಯ ವೇನು?** ಕುರಿತು ದೂರದರ್ಶನದಲ್ಲಿ ಒಂದು ವಾರದ ಸರಣಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ.<br>➢ ಆಕಾಶವಾಣಿಯಲ್ಲಿ ಒಂದು ತಿಂಗಳವರೆಗೆ ರೇಡಿಯೋ ಜಿಂಗಲ್ಸ್ ಮೂಲಕ ಬಾಲ್ಯವಿವಾಹ ನಿಷೇಧ ಕುರಿತು ಅರಿವು ಮೂಡಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲು ಉದ್ದೇಶಿಸಲಾಗಿದೆ.<br><br>**ಬಾಲ್ಯವಿವಾಹ ನಿಷೇಧ ಕಾಯ್ದೆ-2006ರ ಅನುಷ್ಠಾನ**<br>➢ ಬಾಲ್ಯವಿವಾಹ ನಿಷೇಧ ಕಾಯ್ದೆ-2006ನ್ನು ಬಲಪಡಿಸಲು ಕರ್ನಾಟಕ ರಾಜ್ಯವು ಕಾಯ್ದೆಗೆ ತಿದ್ದುಪಡಿಯನ್ನು ತಂದಿದ್ದು, ಬಾಲ್ಯವಿವಾಹ ನಿಷೇಧ (ಕರ್ನಾಟಕ ತಿದ್ದುಪಡಿ) ಅಧಿನಿಯಮ-2016ರನ್ನು ದಿ:03.03.2018ರಿಂದ ಜಾರಿಗೆ ತಂದಿರುತ್ತದೆ. ತಿದ್ದುಪಡಿ ಕಾಯ್ದೆಯ ಸುಗಮ ಅನುಷ್ಠಾನಕ್ಕಾಗಿ ಕರ್ನಾಟಕ ನಿಯಮಗಳನ್ನು ತಿದ್ದುಪಡಿ ಮಾಡುವ ಸಲುವಾಗಿ ಸಮಿತಿಯನ್ನು ರಚಿಸಲಾಗಿದೆ.<br><br>**ಇತರೆ ಕ್ರಮಗಳು:**<br>➢ 29,000 **ಕ್ರಮಬದ್ಧ ಕಾರ್ಯವಿಧಾನ (ಎಸ್.ಓ.ಪಿ) ಮಾರ್ಗ ಸೂಚಿಗಳನ್ನು** ಮುದ್ರಿಸಲು ಕ್ರಮವಹಿಸಲಾಗಿದೆ.<br>➢ ಬಾಗಲಕೋಟೆ ಜಿಲ್ಲಾ ಪಂಚಾಯತ್ ಹಾಗೂ ಎನ್.ಐ.ಸಿ ಇವರು ಅಭಿವೃದ್ಧಿ ಪಡಿಸಿರುವ **"ಸುರಕ್ಷಿಣಿ ಪೋರ್ಟಲ್"**ನ್ನು ರಾಜ್ಯಾದ್ಯಂತ ವಿಸ್ತರಿಸಲು ಕ್ರಮವಹಿಸಲಾಗುತ್ತಿದೆ. |

**ಸಂ:** ಮಮಇ 75 ಮಮಲ 2022

**(ಆಚಾರ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ವಿಕಲಚೇತನರ ಹಾಗೂ
ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ವಿಧಾನ ಪರಿಷತ್ತಿನ ಸದಸ್ಯರಾದ ಡಾ. ಕೆ ಗೋವಿಂದರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು)ಇವರ ಚುಕ್ಕೆ ಗುರುತಿನ ಪ್ರಶ್ನೆಸಂಖ್ಯೆ:303(2429)ರ ಉತ್ತರಕ್ಕೆ ಅನುಬಂಧ-1

ಕಳೆದ ಮೂರು ವರ್ಷದಲ್ಲಿ ರಾಜ್ಯದಲ್ಲಿ ನಡೆದಿರುವ ಬಾಲ್ಯವಿವಾಹಗಳ ವರ್ಷವಾರು, ಜಿಲ್ಲಾವಾರು ಮಾಹಿತಿ

| ಕ್ರ.ಸಂ | ಜಿಲ್ಲೆ | ಬಾಲ್ಯವಿವಾಹ ನಡೆದ ಪ್ರಕರಣಗಳು 2018-19 | ಬಾಲ್ಯವಿವಾಹ ನಡೆದ ಪ್ರಕರಣಗಳು 2019-20 | ಬಾಲ್ಯವಿವಾಹ ನಡೆದ ಪ್ರಕರಣಗಳು 2020-21 |
|---|---|---|---|---|
| 1 | 2 | 3 | 4 | 5 |
| 1 | ಬಾಗಲಕೋಟೆ | 2 | 5 | 18 |
| 2 | ಬೆಂಗಳೂರು(ಗ್ರಾ) | 18 | 0 | 8 |
| 3 | ಬೆಂಗಳೂರು (ನ) | 4 | 3 | 9 |
| 4 | ಬೆಳಗಾವಿ | 7 | 12 | 18 |
| 5 | ಬಳ್ಳಾರಿ | 13 | 3 | 12 |
| 6 | ಬೀದರ್ | 12 | 0 | 3 |
| 7 | ವಿಜಯಪುರ | 1 | 0 | 1 |
| 8 | ಚಾಮರಾಜನಗರ | 7 | 3 | 1 |
| 9 | ಚಿಕ್ಕಬಳ್ಳಾಪುರ | 2 | 9 | 12 |
| 10 | ಚಿಕ್ಕಮಗಳೂರು | 2 | 5 | 15 |
| 11 | ಚಿತ್ರದುರ್ಗ | 7 | 2 | 4 |
| 12 | ದಕ್ಷಿಣ ಕನ್ನಡ | 5 | 4 | 1 |
| 13 | ದಾವಣಗೆರೆ | 1 | 1 | 7 |
| 14 | ಧಾರವಾಡ | 6 | 2 | 0 |
| 15 | ಗದಗ | 2 | 1 | 3 |
| 16 | ಕಲಬುರ್ಗಿ | 5 | 10 | 4 |
| 17 | ಹಾಸನ | 3 | 0 | 39 |
| 18 | ಹಾವೇರಿ | 7 | 0 | 0 |
| 19 | ಕೊಡಗು | 5 | 1 | 2 |
| 20 | ಕೋಲಾರ | 0 | 1 | 1 |
| 21 | ಕೊಪ್ಪಳ | 2 | 5 | 8 |
| 22 | ಮಂಡ್ಯ | 1 | 28 | 34 |
| 23 | ಮೈಸೂರು | 0 | 7 | 31 |
| 24 | ರಾಯಚೂರು | 2 | 2 | 18 |
| 25 | ರಾಮನಗರ | 0 | 31 | 20 |
| 26 | ಶಿವಮೊಗ್ಗ | 2 | 17 | 18 |
| 27 | ತುಮಕೂರು | 1 | 4 | 7 |
| 28 | ಉಡುಪಿ | 0 | 0 | 0 |
| 29 | ಉತ್ತರ ಕನ್ನಡ | 1 | 0 | 1 |
| 30 | ಯಾದಗಿರಿ | 1 | 0 | 1 |
| ಒಟ್ಟು | | 119 | 156 | 296 |